# ಕಾನನ

ಏಪ್ರಿಲ್ 2016

ನಿಸರ್ಗದೆಡೆಗೆ ಪಯಣ



BANNERUGHATTA

WILDLIFE
CONSERVATION
GROUP

# ಏಪ್ರಿಲ್ 2016

BANNERUGHATTA

**WILDLIFE CONSERVATION GROUP**




* ಬಂಡಜ್ಜೆ ಮತ್ತು ಫಂಗಸ್ ನಾಟ್‌ಗಳು
* ಕಡಲಗಾಮಿ ಗಲ್ಲುಗಳು
* ಕೀಟ ಬೇಡವೆಂದ ಜೇಡ
* ಕಾನನದ ಬೈಗು (ಕವನ)
* ಪ್ರಕೃತಿ ಬಿಂಬ


**ಲೇಖಕ ವೃಂದ**

ನಾಗೇಶ್ .ಓ .ಎಸ್

ಸ್ಮಿತಾ ರಾವ್

ಜೈಕುಮಾರ್ .ಆರ್

ಅನಿಕೇತನ

ಶ್ರೀನಿವಾಸ್ ಶಾಮಾಚಾರ್

**ವಿನ್ಯಾಸ**

ಅಶ್ವಥ .ಕೆ.ಎನ್

**ಮುಖಪುಟ ಛಾಯಾಚಿತ್ರ**

ಶ್ರೀನಿವಾಸ್ ಶಾಮಾಚಾರ್

**ಪರಿಷ್ಕರಣೆ**

ಮುರಳಿ .ಎಸ್

# ಬಂಡಜ್ಜೆ ಮತ್ತು ಫಂಗಸ್ ನಾಟ್‌ಗಳು



"ಮಲೆನಾಡು" ಹೆಸರೇ ಹೇಳುವಂತೆ ಎತ್ತ ನೋಡಿದರೂ ಗಗನಕ್ಕೆ ಮುತ್ತಿಕ್ಕುವಂತಹ ದೂರದ ದಿಗಂತದವರೆಗೂ ಒಂದಕ್ಕೊಂದು ಸ್ಪರ್ಧಿಸಿದಂತೆ ಬೆಳೆದು ನಿಂತಿರುವ ಪರ್ವತರಾಶಿಯ ತಾಣ. ಇದು ಎಂತವರನ್ನೂ ಮೋಡಿಮಾಡಿ ತನ್ನತ್ತ ಸೆಳೆಯುವ ಅಪಾರ ಶಕ್ತಿ ಹೊಂದಿದೆ. ಅದರಲ್ಲೂ ಪರಿಸರ ಪ್ರೇಮಿಗಳಿಗೆ, ಚಾರಣಿಗರಿಗೆ ಸ್ವರ್ಗಕ್ಕೆ ಒಂದೇ ಮೆಟ್ಟಿಲು ಎನ್ನುವಷ್ಟು ಮುದನೀಡುತ್ತದೆ. ನನಗೆ ಅಂತಹ ಮಲೆನಾಡಿನ ದರ್ಶನವಾದದ್ದು ನಾನು ಪ್ರೈಮರಿ ಸ್ಕೂಲಿನಲ್ಲಿದ್ದಾಗಲಾದರೂ ಮತ್ತೇ ಅದರ ಸವಿಯನ್ನು ಆಸ್ವಾಧಿಸಲು ದಶಕಗಳೇ ಬೇಕಾಯ್ತು. ಈ ನಾಡಿನ ಮೇಲೆ ನನಗೆ ಮೋಹ ಬರಲು ಕಾರಣ ನನ್ನ ಬೆಸ್ಟ್ ಫ್ರೆಂಡ್ ಆದ ನಮ್ಮ ಪ್ರೈಮರಿ ಸ್ಕೂಲ್ ಗ್ರಂಥಾಲಯ.



ಪುಸ್ತಕ ಓದುವುದು ನನ್ನ ನೆಚ್ಚಿನ ಹವ್ಯಾಸ. ಆದರೂ ಪಠ್ಯಪುಸ್ತಕಗಳಲ್ಲೇಕೋ ಆಸಕ್ತಿ ಇಲ್ಲ ಬಿಡಿ! ಅದು ಬೇರೆಯ ಮಾತು. ನನ್ನ ಫ್ರೆಂಡ್ ಬಳಿ ಸಹಸ್ರಾರು ಪುಸ್ತಕಗಳಿದ್ದುದರಿಂದ ನನ್ನ ಬಿಡುವಿನ ಸಮಯವೆಲ್ಲಾ ನಾನು ಅಲ್ಲಿಯೇ ಕಳೆಯುತ್ತಿದ್ದೆ. ಹೀಗೆ ಒಮ್ಮೆ ಯಾವುದೋ ಪುಸ್ತಕವನ್ನರಸುತ್ತಾ ಪುಸ್ತಕಗಳನ್ನೆಲ್ಲಾ ಶೋಧಿಸುತ್ತಿದ್ದ ನನಗೆ "**ಮಲೆನಾಡಿನ ಚಿತ್ರಗಳು**" ಎಂಬ ಕುವೆಂಪುರವರ ಪುಸ್ತಕ ಕಣ್ಣಿಗೆ ಬಿತ್ತು. ಮಲೆನಾಡಿನ ಸೌಂದರ್ಯವು ನನ್ನನ್ನು ಸ್ವಲ್ಪ ಮೋಡಿಮಾಡಿದ್ದರಿಂದ ಎಂತಹ ಚಿತ್ರಗಳಿರಬಹುದು ನೋಡಿಯೇ ಬಿಡೋಣ ಎಂದು ಪುಸ್ತಕ ತೆಗೆದು ನೋಡಲು ಕುಳಿತೆ. ಆದರೆ ಅದರಲ್ಲಿ ಒಂದೇ ಒಂದು ಚಿತ್ರವೇ ಇಲ್ಲ!



ಬರೀ ಅಕ್ಷರಗಳೆ, "ಹೇಗೂ ಪುಸ್ತಕ ತೆಗೆದಾಗಿದೆ ಅದರಲ್ಲೂ ಇದು ಕುವೆಂಪು ಪುಸ್ತಕ, ಓದಿಯೇ ಬಿಡೋಣ" ಎಂದು ಮೊದಲ ಕಥೆ ಶುರುಮಾಡಿದೆ, ನಿಲ್ಲಿಸಿದ್ದು ಕೊನೆಯ ಕಥೆ ಮುಗಿದಾಗಲೇ!. ಕುವೆಂಪುರವರ ಮಲೆನಾಡಿನ ಬಾಲ್ಯದ ಘಳಿಗೆಗಳನ್ನು ಹೇಳುವ ಆ ಪುಸ್ತಕವನ್ನು ಮಲೆನಾಡಿನ ಮೇಲೆ ಇನ್ನಷ್ಟು ಪ್ರೀತಿ ಹೆಚ್ಚಿತಾದರೂ ಅದರ ಬಗ್ಗೆ ಹುಚ್ಚು ಹಿಡಿದು ಮಲೆನಾಡನ್ನು ನೋಡಲೇ ಬೇಕು ಎನಿಸಿದ್ದು ಕನ್ನಡ ಸಾಹಿತ್ಯದ ಕಳಸಪ್ರಾಯರಾದ ರಾಷ್ಟ್ರಕವಿ ಕುವೆಂಪುರವರ "ಮಲೆಗಳಲ್ಲಿ ಮದುಮಗಳು" ಪುಸ್ತಕ ಓದಿದಾಗ ಹಾಗೂ ಕಳೆದ ವರ್ಷ ಬೆಂಗಳೂರಿನಲ್ಲಿ ರಂಗಾಯಣದವರು ಪ್ರದರ್ಶಿಸಿದ ಮಲೆಗಳಲ್ಲಿ ಮದುಮಗಳು' ನಾಟಕವನ್ನು ನೋಡಿದಾಗ.



ನನ್ನ ಈ ಹುಚ್ಚನ್ನು ನನ್ನ ಗೆಳೆಯರೊಂದಿಗೆ ಹಂಚಿಕೊಂಡಿದ್ದೇ ತಡ ನಾಟಕವನ್ನು ಅವರೂ ನೋಡಿದ್ದರಿಂದಲೋ ಏನೋ ಒಂದೇ ವಾರದಲ್ಲಿ ಮಲೆನಾಡಿನ, ಅವರು ಮುಂಚೆ ಬೇಟಿಯಿಟ್ಟಿದ್ದ "ಬಂಡಜ್ಜೆ" ಎನ್ನುವ ಸ್ಥಳಕ್ಕೆ ಹೊರಡುವುದೆಂದು ನಿಶ್ಚಯಮಾಡಿಯೇ ಬಿಟ್ಟರು. 'ರೋಗಿ ಬಯಸಿದ್ದು ಹಾಲು ಅನ್ನ, ವೈದ್ಯ ಹೇಳಿದ್ದು ಹಾಲು ಅನ್ನ ಎಂಬಂತೆ" ನಾನು ಪೂರ್ವತಯಾರಿಯನ್ನೆಲ್ಲಾ ಮುಗಿಸಿ ವಾರಂತ್ಯದಲ್ಲಿ ಹೊರಡಲು ರೆಡಿಯಾದೆನು. ಶುಕ್ರವಾರ ಸಂಜೆ ಬೆಂಗಳೂರಿನಿಂದ ಹೊರಟು, ಬೆಳಗ್ಗೆ ಆರು ಗಂಟೆಗೆ ಕೊಟ್ಟಿಗೆಹಾರ' ತಲುಪಿ ಅಲ್ಲಿಯೇ ತಿಂಡಿತಿಂದು ಮಧ್ಯಾಹ್ನದ ಊಟವನ್ನು ಕಟ್ಟಿಸಿಕೊಂಡು ಅಲ್ಲಿಂದ ನಾವು ಚಾರಣ ಶುರುಮಾಡುವ ಸ್ಥಳಕ್ಕೆ ಬಸ್ಸಿನಲ್ಲಿ ಬಂದು ಒಂಬತ್ತು ಗಂಟೆಗೆ ನಡೆಯಲು ಶುರುಮಾಡಿ ಬಂಡಜ್ಜೆಯನ್ನು ಸಾಯಂಕಾಲ ಸೇರಿ ಅಲ್ಲಿಯೇ ರಾತ್ರಿಕಳೆದು ಬೆಳಗ್ಗೆ ಹಿಂದುರುಗುವುದೆಂದು ಪೂರ್ವಯೋಜನೆ ಮಾಡಿದ್ದರಿಂದ ಶುಕ್ರವಾರ ರಾತ್ರಿ ಅವರನ್ನೂ ಕೂಡಿ ಬಂಡಜ್ಜೆ ಕಡೆ ಹೊರಟೆವು.

"ಬಂಡಜ್ಜೆ" ದಕ್ಷಿಣ ಕನ್ನಡ ಜಿಲ್ಲೆಯ ಬೆಳತಂಗಡಿ ತಾಲ್ಲೂಕಿನಲ್ಲಿರುವ ಒಂದು ಸುಂದರವಾದ ಜಲಪಾತ. ಚಾರ್ಮಡಿಘಾಟ್ ನಲ್ಲಿ ಕಂಡುಬರುವ ಇದು ನೇತ್ರಾವತಿ ನದಿಗೆ ಸೇರುವ ಉಪನದಿಯ ಜಲಪಾತವಾಗಿದ್ದು ಚಾರಣಕ್ಕೆ ಪ್ರಶಸ್ಥ ಸ್ಥಳ. ಈ ಜಲಪಾತದ ಸುತ್ತಲಿನ ಅರಣ್ಯವು ಆನೆ, ಕಾಟಿ, ಜಿಂಕೆ, ಚಿರತೆ ಮುಂತಾದ ಪ್ರಾಣಿಗಳಿಗೆ, ಪಕ್ಷಿಗಳಿಗೆ ಹಾಗೂ ಸಹಸ್ರಾರು ಜೀವಿಗಳ ಮನೆಯಾಗಿದೆ. ಕಾಡಿನ ಮಧ್ಯೆಯಿರುವ ಈ ಜಲಪಾತವನ್ನು ತಲುಪಲು ನಡಿಗೆಯನ್ನೇ ಅವಲಂಬಿಸಬೇಕು.

ನಮ್ಮ ಯೋಜನೆಯಂತೆ ನಾವು ಬೆಳಗ್ಗೆ ಚಾರಣದ ಪ್ರಾರಂಭ ಸ್ಥಳಕ್ಕೆ ಸೇರಿ ತಮ್ಮ ತಮ್ಮ ಯಮಬಾರದ ಬ್ಯಾಗ್ ಗಳನ್ನು ಹೊತ್ತು ಹಸಿರು ಸೀರೆಯನ್ನುಟ್ಟು ರಾರಾಜಿಸುತ್ತಿದ್ದ ಆ ಪ್ರಕೃತಿಮಾತೆಯ ಸಾಮ್ರಾಜ್ಯದಲ್ಲಿ ಪುಟ್ಟಮಕ್ಕಳಂತೆ ಅಂಬೆಗಾಲಿಡುತ್ತಾ ಸುತ್ತಲೂ ಬರುತ್ತಿರುವ ಹಕ್ಕಿಗಳ ಕಲರವವನ್ನು, ತೊರೆಯ ನಾದವನ್ನು ಆಸ್ವಾಧಿಸುತ್ತಾ ನಡೆಯ ತೊಡಗಿದೆವು. ಛಾಯಾಗ್ರಾಹಕರಾದ ವಿಪಿನ್, ಕಾರ್ತಿಕ್ ರವರು ಸುತ್ತಲೂ ಕಾಣುತ್ತಿದ್ದ ಕಾಡಿನ ಹೂಗಳನ್ನು,

ಜೇಡಗಳನ್ನು, ಇರುವೆಗಳನ್ನು ತಮ್ಮ ಕ್ಯಾಮೆರಾದಲ್ಲಿ ಸೆರೆ ಹಿಡಿಯುತ್ತಾ ಬರುತ್ತಿದ್ದರೆ ನಾನು, ಅಶ್ವಥ್ ಆ ಸೊಬಗನ್ನು ಮನದಲ್ಲೇ ಸೆರೆಹಿಡಿಯುತ್ತಿದ್ದೆವು. ಪಕ್ಕದಲ್ಲಿಯೇ ಹರಿಯುತ್ತಿದ್ದ ಜರಿಯ ಜುಳು ಜುಳು ನಾದವು ನಮ್ಮ ಕಣ್ಮುಂದೆ ನಡೆಯುತ್ತಿದ್ದ ಹಲವಾರು ಚಟುವಟಿಕೆಗಳಿಗೆ ಹಿಂದಿನ ಸಂಗೀತಗಾರನಂತೆ ವರ್ತಿಸುತ್ತಿತ್ತು. ಮರಗಳ ಮೇಲ್ಛಾವಣಿಯ ಸಂಧುಗಳಿಂದ ನುಸುಳುತ್ತಿದ್ದ ಸೂರ್ಯನ ಕಿರಣಗಳು ಸ್ವರ್ಗಕ್ಕೆ ಹಾಕಿರುವ ದಾರದ ಎಳೆಗಳಂತೆ ಭಾಸವಾಗುತ್ತಿತ್ತು.



ಈ ಮಂದಗತಿಯ ನಡಿಗೆಯ ಒಂದೊಂದು ಹೆಜ್ಜೆಯನ್ನೂ ಸವಿಯುತ್ತಾ ವನದೇವಿಯ ಸೊಬಗಿಗೆ ವಂದಿಸುತ್ತಾ ನಡೆಯುತ್ತಿದ್ದ ನನಗೆ ಕುವೆಂಪುರವರ ಮಲೆನಾಡಿನ ವರ್ಣನೆ ನೂರಕ್ಕೆ ನೂರರಷ್ಟು ಸತ್ಯ ಎಂದೆನಿಸಿತು. ಈ ಸೌಂದರ್ಯದ ಅಮಲಿನಲ್ಲಿ ತೇಲಾಡುತ್ತಾ ಮುಂದೆ ಹೋಗುತ್ತಿದ್ದ ನಾನು “ಹಾವು. . . . . ಹಾವು. . . . .” ಎಂದು, ಮುಂದೆ ಹೋಗುತ್ತಿದ್ದ ಉದ್ದನೆಯ ಆಕೃತಿಯನ್ನು ನೋಡಿ ಚೀರಿದೆ. ನನ್ನ ಹಿಂದೆಯೇ ಸ್ವಲ್ಪ ದೂರದಲ್ಲಿ ಬರುತ್ತಿದ್ದ ಎಲ್ಲರೂ ಒಮ್ಮೆಲೇ ಓಡಿ ಬಂದರು. ಅವರು ಬರುವಷ್ಟರೊಳಗೆ ಅಲ್ಲಿಯೇ ನಿಂತಿದ್ದ ನನಗೆ ಆ ಉದ್ದನೆಯ ಆಕೃತಿಯ ದೇಹವೂ ಹಾವಿನಂತೆ ಇರದೆ ವಿಚಿತ್ರವಾಗಿರುವುದನ್ನು ಕಂಡು “ಹಾವಲ್ಲವೇನೋ?” ಎಂದೆನಿಸಿತು. ಅಷ್ಟರಲ್ಲಿ ಬಳಿ ಬಂದ ವಿಪಿನ್

“ಹಾವಲ್ಲ ಇದು, ಫಂಗಸ್ ನಾಟ್ ಹುಳುಗಳು” ಎಂದರು ಹಿಂದೆ ಎಂದೂ ಈ ತರಹದದ್ದನ್ನು ಕಾಣದ ನಾನು

“ಹುಳುನಾ!! ಇಷ್ಟೊಂದ್ ಉದ್ದ ಇದೆ!” ಎಂದೆ



“ಇದರಲ್ಲಿ ಸಾವಿರಾರು ಹುಳುಗಳು ಒಂದರ ಮೇಲೆ ಒಂದು ಸೇರ್ಕೊಂಡು ಹಾವಿನ ರೀತಿ ಆಗಿವೆ, ತುಂಬಾ ಹತ್ತಿರದಿಂದ ನೋಡಿ ಗೊತ್ತಾಗುತ್ತೆ ಇದ್ರಲ್ಲಿ ಎರಡು ಮಿಲಿ ಮೀಟರ್ ಗಿಂತ ಐದು ಮಿ. ಮೀಟರ್ ಇರೋ ಸಾವಿರಾರು ಹುಳುಗಳ ಸರಪಳಿ ಇದೆ ಅಂತ, ಈ ತರ ಮಾಡಿಕೊಂಡಿರೋ ಇವು ಪರಾಗಸ್ಪರ್ಶಕ್ಕೂ ಉಪಕಾರಿ ಹಾಗೂ ವೈರಿಗಳಿಂದಲೂ ಅಪಾಯ ಕಡಿಮೆ” ಎಂದರು ಇದನ್ನು ಕೇಳಿದ ನಮಗೆ ಪ್ರಕೃತಿಯಲ್ಲಿ ಇದೇ ತರಹ ಇನ್ನೆಷ್ಟು ರಹಸ್ಯಗಳು ಅಡಕವಾಗಿದೆಯೋ ಎಂದು ಆಶ್ಚರ್ಯವಾಯಿತು. ಪ್ರಕೃತಿಮಾತೆಯ ಗುಣವೇ ಹಾಗೆ ಯಾರು ಅದರಲ್ಲಿನ ರಹಸ್ಯಗಳನ್ನು ಬಿಡಿಸಲು ಯತ್ನಿಸುವರೋ ಅವರಿಗೆ ಇನ್ನಷ್ಟು ಆಶ್ಚರ್ಯಕರ ರಹಸ್ಯಗಳನ್ನು ನಾವು ಅಪೇಕ್ಷಿಸುವ ಮುಂಚೆಯೇ ತೆರೆದಿಡುತ್ತಾಳೆ.

ಈ ಜೀವಿಗಳ ಅಪರೂಪದ ನಡವಳಿಕೆಯನ್ನು ಫೋಟೋದಲ್ಲಿ ಸೆರೆಹಿಡಿದು ನಮ್ಮ ದಾರಿಯ ಅಂತ್ಯವು ಇನ್ನು ತುಂಬಾ ದೂರವಿದ್ದುದರಿಂದ ಸಮಯ ವ್ಯರ್ಥಮಾಡದೆ ಮುಂದೆಸಾಗಿದೆವು. ನಾವು ಸ್ವಲ್ಪ ದೂರ ಕ್ರಮಿಸುವಷ್ಟರಲ್ಲೇ ಹುಲ್ಲುಗಾವಲು ಪ್ರದೇಶ ಪ್ರವೇಶಿಸಿದ್ದರಿಂದ ಬಿಸಿಲಿನ ಬೇಗೆಯು ನಮ್ಮ ಚಾರಣದ ಆಸಕ್ತಿಯನ್ನು ಕಡಿಮೆಮಾಡಲು ಯತ್ನಿಸಿತಾದರೂ ಗಾಳಿಯು ತಂಪಾಗಿ ಬೀಸುತ್ತಿದ್ದುದರಿಂದ ಹಾಗೂ ಸುತ್ತಲಿನ ಪರಿಸರ ನಮಗೆ ಚೈತನ್ಯ ತುಂಬುತ್ತಿದ್ದುದರಿಂದ ಬೆವರಿನಲ್ಲಿ ತೊಳೆದೊಯ್ದ ನಾವು ಬಂಡಜ್ಜೆ ಸೇರಲು ಘಂಟೆ ಐದಾಗಿತ್ತು.

ಅಲ್ಲಿ ಹರಿಯುತ್ತಿದ್ದ ಸ್ವಚ್ಛಂಧವಾದ ನೀರಿಗೆ ಬಂದಾಕ್ಷಣವೇ ಮೈಯೊಡ್ಡಿದ ನಮಗೆ ನಡೆದು ಬಂದ ಆಯಾಸ, ಬಿಸಿಲಿನ ಧಗೆ ಎಲ್ಲಾ ಒಮ್ಮೆಲೆ ಮಾಯವಾಯಿತು. ರಾತ್ರಿಯ ತನಕವು ಸುತ್ತಲಿನ ವಿಪಿನನ ಸೌಂದರ್ಯವನ್ನು ಕಣ್ತುಂಬಿಸಿಕೊಂಡು ಹೊಳೆಯುತ್ತಿದ್ದ ನಕ್ಷತ್ರಗಳನ್ನೆಣಿಸುತ್ತಾ ಹಾಗೇ ನಿದ್ರೆಗೆ ಜಾರಿದೆವು. ನಡುಗೆಯ ಆಯಾಸದಿಂದ ಬಳಲಿದ್ದ ಎಲ್ಲರೂ ಕಾಡಿನ ಮಧ್ಯದಲ್ಲಿದ್ದೇವೆ, ಯಾವುದಾದರೂ ಪ್ರಾಣಿ ಬಂದರೆ ಏನು ಕಥೆ? ಎಂದು ಒಮ್ಮೆಲೂ ಯೋಚಿಸದೆ ಸೂರ್ಯ ಕಣ್ಬಿಡುವ ತನಕ ವಿರಮಿಸಿದೆವು. ಮುಂಜಾನೆ ಆಗ ತಾನೆ ಏಳುತ್ತಿದ್ದ ಅರುಣನ ದರ್ಶನ ಪಡೆದು ನಮ್ಮ ಬಳಿ ಇದ್ದ ಚಪಾತಿಗಳನ್ನು ತಿಂದು ಬೆಳಗ್ಗೆ ಒಂಬತ್ತಕ್ಕೆ ಹೊರಟು ಅಲ್ಲಲ್ಲಿ ದಣಿವಾರಿಸಿಕೊಳ್ಳುತ್ತಾ ನಮ್ಮ ಉಗಮ ಸ್ಥಳಕ್ಕೆ ಬರುವಷ್ಟರಲ್ಲಿ ಸಂಜೆ ಆರಾಗಿತ್ತು. ಎಲ್ಲರಿಗೂ ಇಲ್ಲಿಯೇ ಇನ್ನು ಕೆಲವು ಸಮಯ ಕಳೆಯಬೇಕೆಂದೆನಿಸಿದರೂ ಅಂದೇ ಬೆಂಗಳೂರಿಗೆ ಹೊರಡಬೇಕೆಂದು ನಿಶ್ಚಯವಾಗಿದ್ದರಿಂದ ಮನಸ್ಸಿಲ್ಲದ ಮನಸ್ಸಿನಿಂದ ಎಲ್ಲರೂ ಉದ್ಯಮಿಗಳ ನಗರಕ್ಕೆ ಮರುದಿನ ಮುಂಜಾವಿಗೇ ಬಂದು ಸೇರಿದೆವು.






- ನಾಗೇಶ್ .ಓ .ಎಸ್



# ಕಡಲಗಾಮಿ ಗಲ್ಲುಗಳು

ಚಳಿಗಾಲ ಬಂತೆಂದರೆ ಒಡಿಶಾದ ಚಿಲ್ಕಾ ಸರೋವರವು ವಲಸೆ ಪಕ್ಷಿಗಳಿಂದ ತುಂಬಿಕೊಂಡು ಇನ್ನೂ ಹೆಚ್ಚು ಸೌಂದರ್ಯದಿಂದ ಮೈದಳೆಯುವುದಲ್ಲದೆ, ಪಕ್ಷಿಗಳ ಆರಾಧಕರಿಗೆ ಕಣ್ಣಿಗೆ ಹಬ್ಬವನ್ನೂ ನೀಡುತ್ತದೆ. ಭಾರತದ ಅತಿ ದೊಡ್ಡ ಉಪ್ಪು ನೀರಿನ ಸರೋವರವಾಗಿ ಸಹಸ್ರಾರು ಪಕ್ಷಿಗಳೂ ಸೇರಿದಂತೆ ಅದೆಷ್ಟೋ ಅಳಿವಿನಂಚಿನಲ್ಲಿರುವ ಜೀವ ಪ್ರಬೇಧಕ್ಕೆ ಆಸರೆಯಾಗಿದೆ.

ರಾಜಹಂಸ, ಮರಳು ಪೀಪಿ, ಗಲ್ಲುಗಳು, ಟರ್ನ್ ಗಳು, ಕೊಕ್ಕರೆಗಳು ಹೀಗೆ ನೂರಾರು ಹಕ್ಕಿಗಳು ಭೂಮಧ್ಯ ರೇಖೆಯನ್ನು ದಾಟಿ, ಈ ಸರೋವರಕ್ಕೆ ಮಂದೆಗಳಲ್ಲಿ ವಲಸೆ ಬಂದು, ಮರಿ ಮಾಡಿ ಮತ್ತೆ ಹಿಂದಿರುಗುತ್ತವೆ. ಇವುಗಳಲ್ಲಿ ನಾನು ಹೇಳ ಹೊರಟಿರುವುದು ಸಮಶೀತೋಷ್ಣ ಪ್ರದೇಶದಿಂದ ಸಾವಿರಾರು ಮೈಲು ಪಯಣಿಸಿ, ಈ ಭೂಭಾಗವನ್ನರಸಿ ಬರುವ ಕಡಲ ಕಾಗೆ (Seagulls) ಗಳ ಬಗ್ಗೆ.



ಆಹಾರದ ಸಂಪಾದನೆ ಮತ್ತು ಮರಿಗಳ ಪೋಷಣೆಯೇ ಗಲ್ಲುಗಳು ಯೋಗ್ಯವಾದ ಹವಾಮಾನವನ್ನು ಹುಡುಕಿ ಭೂಖಂಡಗಳನ್ನೂ ದಾಟಿ ವಲಸೆ ಬರಲು ಪ್ರಮುಖ ಕಾರಣಗಳಾಗಿವೆ. ಹೀಗೆ ಕಡಲ ಯಾತ್ರೆಗೆ ಮುಂದಾಗುವ ಇವುಗಳ ಜೀವನ ಅಚ್ಚರಿಯ ಆಗರವಾಗಿರುವುದಂತೂ ಹೌದು. ಸುಮಾರು ಇಪ್ಪತ್ತಿಕ್ಕಿಂತಲೂ ಹೆಚ್ಚು ವಿಧದ ಗಲ್ಲುಗಳು ಕಂಡುಬಂದರೂ, ಈ ಸರೋವರದಲ್ಲಿ ಕಾಣಲು ಸಿಕ್ಕಿದ್ದು Brown headed gulls (ಕಂದು ತಲೆಯ ಗಲ್ಲುಗಳು). ಇತರ ಗಲ್ಲುಗಳಿಗಿಂತ ಗಾತ್ರದಲ್ಲಿ ಚಿಕ್ಕದಾಗಿದ್ದರೂ, ಅವುಗಳಿಗೆ ಹೋಲಿಸಿದಾಗ ಹಲವಾರು ಸಾಮ್ಯತೆಗಳೂ ಕಂಡು ಬರುತ್ತವೆ.

ಕೆಂಪಾದ ಕೊಕ್ಕನ್ನು, ಅದರ ತುದಿಯಲ್ಲಿ ಕಪ್ಪು ಬಣ್ಣವನ್ನು ಹೊಂದಿರುವ ಇವು, ಹಾಗೇ ಕೆಂಪಾದ ಕಾಲುಗಳನ್ನೂ ಹೊಂದಿವೆ. ತಲೆಯ ಭಾಗವು ಕಂದು ಬಣ್ಣದಲ್ಲಿದ್ದರೂ, ಅದು ಚಳಿಗಾಲದ ಸಮಯದಲ್ಲಿ ಇಲ್ಲವಾಗುತ್ತದೆ. ಹೀಗೆ ಕಾಲವು ಬದಲಾದಂತೆ ಉಷ್ಣತೆಯ ವ್ಯತ್ಯಾಸದೊಂದಿಗೆ ಮೈಮೇಲಿನ ಗರಿಗಳು ಉದುರಿ, ನಂತರ ಹೊಸ ಗರಿಗಳು ಮೂಡುತ್ತದೆ. ಇನ್ನು ಕಡಲ ಮೇಲಿನ ಗಾಳಿಯನ್ನು ಅರಿತು ಹಾರಲು ಭೂಮಿಯ ಮೇಲೆ ಹಾರಾಡುವ ಪಕ್ಷಿಗಳಿಗಿಂತ ಸ್ವಲ್ಪ ಉದ್ದವಾದ ರೆಕ್ಕೆಯನ್ನೇ ಹೊಂದಿವೆ. ಹೀಗೆ ಇವುಗಳು ಬೀಸುವ ಗಾಳಿಯನ್ನಾಧರಿಸಿ ಬೇರೆ ಬೇರೆ ರೀತಿಯಲ್ಲಿ ಹಾರುತ್ತವೆ. ಗಾಳಿಯಲ್ಲಿ ತೇಲಾಡುತ್ತವೆ. ನೀರಿನ ಮೇಲೆ ಎರಗುತ್ತವೆ. ಹಾಗೇ ವೇಗವಾಗಿ ಚಲಿಸುವಾಗ ವೇಗವನ್ನು ತಟ್ಟನೆ ನಿಯಂತ್ರಿಸುವ ಸಾಮರ್ಥ್ಯವನ್ನೂ ಹೊಂದಿವೆ. ಉಪ್ಪು ನೀರು ಹಾಗೂ ಸಿಹಿ ನೀರಿನ ಸರೋವರಗಳೆರೆಡರಲ್ಲೂ ನೆಲೆ ಕಂಡುಕೊಳ್ಳುವ ಕೆಲವೇ ಕೆಲವು ಪಕ್ಷಿಗಳಲ್ಲಿ ಇವುಗಳೂ ಒಂದು.

ಹೀಗೆ ಒಂದು ಖಂಡದಿಂದ ಇನ್ನೊಂದಕ್ಕೆ ವಲಸೆ ಬರುವ ಇವು ಹೊಟ್ಟೆಬಾಕ ಕೂಡ ಹೌದು! ಚಳಿಗಾಲ ಬಂತೆಂದರೆ ಅವುಗಳು ವಾಸಿಸುವ ಪ್ರದೇಶವು ಹಿಮದಿಂದ ಆವೃತವಾಗಿ ಮೀನು ದೊರಕುವುದು ಅಸಾಧ್ಯವಾದಾಗ ಕಡಲನ್ನು ದಾಟಲು ಸಿದ್ಧವಾಗುತ್ತವೆ. ಆಹಾರವನ್ನು ಅರಸುತ್ತಾ ಹೊರಡುವ ಈ ಮತ್ಸ್ಯಾಹಾರಿಗಳು ಕಡಲಲ್ಲಿ ಮೀನುಗಾರರ ಬಲೆಯ ಬಳಿ ಸುಳಿಯುತ್ತಾಡುತ್ತಿರುತ್ತವೆ. ಅಲ್ಲದೆ ಇತರ ಕ್ರಿಮಿ ಕೀಟಗಳನ್ನೂ ಸೇವಿಸುತ್ತದೆ. ಆಹಾರಕ್ಕಾಗಿ ಇತರ ಗಲ್ಲುಗಳೊಂದಿಗೆ ಅರಚುತ್ತಾ ಜಗಳಕ್ಕೂ ನಿಲ್ಲುತ್ತದೆ!.



ವರ್ಷದ ಪ್ರತಿ ಋತುವಿನಲ್ಲೂ ಒಂದಿಲ್ಲೊಂದು ಕಡಲ ಪ್ರದೇಶದಲ್ಲಿ ಕಾಣಸಿಗುವ ಗಲ್ಲುಗಳು, ಆಹಾರವನ್ನು ಕಡಲಿನಲ್ಲಿ ಕಂಡುಕೊಂಡರೂ, ನೆಲದ ಮೇಲೇ ಮರಿಗಳನ್ನು ಬೆಳೆಸುವ ಪ್ರಕ್ರಿಯೆಗೆ ಮುಂದಾಗುತ್ತವೆ. ಚಿಲ್ಕಾ ಸರೋವರದ ನಲಬಾನಾ ದ್ವೀಪವು ಇದಕ್ಕೆ ಸಾಕ್ಷಿಯಾಗುತ್ತದೆ. ಸಹಸ್ರಾರು ಸಂಖ್ಯೆಯಲ್ಲಿ ಬರುವ ಇವು ವರ್ಷಕ್ಕೆ ಒಂದು ಬಾರಿ ಮೊಟ್ಟೆಯನ್ನಿಟ್ಟು, ಮರಿ ಮಾಡಿ, ಕೊನೆಗೆ ಅದಕ್ಕೆ ಕಾವನ್ನಿಡುವ ಕೆಲಸವನ್ನು ಇಲ್ಲಿ ಗಂಡು ಮತ್ತು ಹೆಣ್ಣುಗಳೆರೆಡೂ ಮಾಡುತ್ತವೆ. ಹಾಗೆಯೇ ಜವಾಬ್ದಾರಿಯುತವಾಗಿ ಪೋಷಿಸುತ್ತಾ, ತಮ್ಮ ಮರಿಗಳಿಗೆ ತೊಂದರೆ ಬಂದೊದಗಿದೆ ಎಂದಾಗ, ಆಕ್ರಮಣಕ್ಕೂ ಸಿದ್ಧವಾಗಿರುತ್ತದೆ. ನಂತರ ಮರಿಗಳಿಗೆ ಬೇಟೆಯನ್ನೂ ಕಲಿಸುವ ಇವು, ಚಾಣಾಕ್ಷತನವನ್ನೂ ಹೊಂದಿವೆ.

ಹೀಗೆ ಅಲೆಮಾರಿ ಜೀವನ ನಡೆಸುವ ಗಲ್ಲುಗಳು ಇಂದು ಹವಾಮಾನ ವೈಪರೀತ್ಯಕ್ಕೆ ಒಳಗಾಗಿ ಆವಾಸ ಸ್ಥಾನ ಕಳೆದುಕೊಂಡ ಇತರ ಜೀವಿಗಳಿಗಿಂತ ಹೊರತಾಗಿಲ್ಲ. ಏರುತ್ತಿರುವ ತಾಪಮಾನ, ಋತುಮಾನಗಳ ಏರುಪೇರಿನಿಂದಾಗಿ ವಲಸೆ ಬರುವಾಗ ದಿಕ್ಕು ಬದಲಾಗುವುದರಿಂದಲೋ, ಅಥವಾ ಬಂದ ಮೇಲೆ ಆಹಾರದ ಅಭಾವಕ್ಕೊಳಗಾಗಿಯೋ ಅಥವಾ ಮರಿಗಳನ್ನು ಪೋಷಿಸಲು ಬೇಕಾದ ಅನುಕೂಲತೆಯ ಕೊರತೆಯಿಂದಾಗಿಯೋ, ಹೀಗೆ ಹಲವಾರು ಕಾರಣಗಳಿಂದಾಗಿ ಮೂಕ ವೇದನೆಗೆ ಜಾರುತ್ತಿವೆ. ಎಂದೋ ಎಚ್ಚೆತ್ತುಕೊಳ್ಳಬೇಕಾಗಿದ್ದ ನಾವು ಇನ್ನೂ ತಡವಾಗಿಲ್ಲ ಎಂಬುದನ್ನರಿತು ಪ್ರಕೃತಿಯ ಉಳಿವಿಗಾಗಿ ಅರ್ಥಾತ್ ನಮ್ಮ ಉಳಿವಿಗಾಗಿ ಶ್ರಮಿಸಲೇಬೇಕಿದೆ.



- ಸ್ಮಿತಾ ರಾವ್

ಶಿವಮೊಗ್ಗ



# ಕೀಟ ಬೇಡವೆಂದ ಜೇಡ

*ಎಲ್ಲರಿಗೂ ಉಗಾದಿಯ ಸಂಭ್ರಮ, ಬೇವು ಬೆಲ್ಲದ ಪರಿಚಯ, ಒಬ್ಬಟ್ಟುಗಳ ರುಚಿ ಇನ್ನೂ ನಾಲಿಗೆ ಬಿಟ್ಟೋಗಿಲ್ಲ. ಹಾಗೆಯೇ ಸಂಭ್ರಮದ ಹಿಂದಿನ ದಿನದ ದಿನಚರಿ ಜ್ಞಾಪಿಸಿಕೊಳ್ಳಿ. . . "ಲೋ ಜೈ ಬೇಗ ಬಂದು ಆ ಜೇಡ್ರಬಲೆ ತಗ್ದು ಫ್ಯಾನ್ ಒರ್ಸೋ" ಅಂತ ಅಮ್ಮನ ಆ ಮೂರನೇ ಕೂಗಿಗೆ ಹೋಗಿ ಬಲೆ ತೆಗೆವಾಗ ಜೇಡ ಬಂದು ಮೈ ಮೇಲೆ ಬಿತ್ತು. ತಟ್ಟಂತ ಅದನ್ನ ಕೊಡವಿ ಪಚಕ್ ಅಂತ ಸಾಯ್ಸಿದ್ದೆ. ಅದೇನೋ* mostly *ಎಲ್ಲಾರ ಮನೇಲೂ ಈ ತರ ಹಾಗೋದುಂಟು. ಮನೆಲೇ ಜೇಡ ಮತ್ತೆ ಅದ್ರ ಬಲೆ ಕಂಡ್ರೆ ಕಿತ್ತಾಕ್ತೀವಿ ಅಲ್ವಾ..? ಇದೇನಪ್ಪ ಈ ಸರಿ* science column *ನಲ್ಲಿ ಕತೆ ಹೇಳ್ತಿದಾರೆ ಅನ್ಕೋಬೇಡಿ, ಈ ಕಥೆಗೂ ಈ ತಿಂಗಳ ವಿಷಯಕ್ಕೂ ಸಂಬಂಧ ಉಂಟು.*

ನಮಗೆಲ್ಲಾ ತಿಳಿದಿರೋ ಹಾಗೆ ಜೇಡದ ಆಹಾರ ಕೀಟಗಳು ಅಲ್ವೇ..? ಹೌದು, ಅದು ಖಂಡಿತ ಸತ್ಯ. ಆದರೆ ಇತ್ತೀಚೆಗಿನ ಹೊಸ ಸಂಶೋದನೆ ಹೇಳುತ್ತೆ, ಕೆಲವು ಜೇಡ ಕೇವಲ ಕೀಟಗಳಲ್ಲದೆ ಕೆಲ ಸಸ್ಯಗಳ ರಸರುಚಿಯ ಜಾಡು ಹಿಡಿದಿವೆಯೆಂದು. ನಮಗೆ ತಿಳಿದಿರೋ ಹಾಗೆ ಮೆಕ್ಸಿಕೋದ "ಬಘೀರ ಕಿಪ್ಲಿಂಗಿ (*Bagheera kiplingi*)" ಅನ್ನೋ ಜಿಗಿಯೋ ಜೇಡ ಮಾತ್ರ ಸಂಪೂರ್ಣ ಸಸ್ಯಾಹಾರಿ, ಇವು ಅಕೇಸಿಯಾ ಮರಗಳ ಮೇಲೆ ಅವಲಂಬಿತ. ಈ ವಿಷಯ ಕೂಡ 2008ರ Science News ನಲ್ಲಿ ಬಂದದ್ದು. ವಿಜ್ಞಾನಿಗಳು ಇಂತಹ ಜೇಡಗಳ ಹುಡುಕಾಡುವಲ್ಲಿ ಕಷ್ಟ ಪಡುವಾಗ್ಲೇ ಒಂದಷ್ಟು ಜಿಗಿಯೋ ಜಾತಿಯ ಜೇಡಗಳು ಸಸ್ಯಾಹಾರಿ ಅಂತ ತಿಳೀತಾ ಬಂತು. ಇದೇ ತಿಂಗಳ Journal of Arachnology ಯಲ್ಲಿ ಬಂದ ಸಂಶೋಧನೆಯ ಪ್ರಕಾರ 60ಕ್ಕೂ ಹೆಚ್ಚಿರುವ ಜೇಡ ಜಾತಿಗಳಲ್ಲಿ ಅಂಟಾರ್ಟಿಕಾ ಬಿಟ್ಟು ಉಳಿದೆಲ್ಲ ಖಂಡದಲ್ಲೂ ಸಸ್ಯಾಹಾರಿ ಜೇಡಗಳಿರೋ ಪುರಾವೆ ಇದೆ.

ಜೇಡಗಳು ಕೇವಲ ಕೀಟಗಳ ಕೊಂದು ಅವುಗಳ ರಸ ಹೀರುತ್ವೆ ಅನ್ಕೊಂಡಿದ್ರೆ, ಅದು ಪೂರ್ಣ ಸರಿಯಲ್ಲ ಯಾಕಂದ್ರೆ ಅವು ಕೀಟಗಳನ್ನ ಬೇಟೆ ಮಾಡಿ ತಮ್ಮ ಜೀರ್ಣರಸಗಳ ಸಹಾಯದಿಂದ ಕೀಟವನ್ನು ಮುಚ್ಚಿ, ನಂತರ ಅದರ chelicerae ಅನ್ನೋ ಅಂಗದ ಸಹಾಯದಿಂದ ಸ್ವಲ್ಪ ಸ್ವಲ್ಪನೇ ಅಗಿದು ಅದರ ರಸ ಹೀರುತ್ತವೆ. ಅಂದ್ರೆ, ಇವು ತಿನ್ನೋ ರೀತಿ ನೋಡಿದ್ರೆ ಗಿಡದ ಎಲೆಗಳ ಕತ್ತರಿಸೋದಲ್ದೆ, ಹಣ್ಣನ್ನ ಕೂಡ ಕಡಿದು ಜಗಿಬಹುದು ಅಲ್ವಾ. ಹೌದು ಕೆಲವು ಜೇಡಗಳು ಕೀಟಗಳ ತಿನ್ನೋ ಹಾಗೆ ಎಲೆಗಳನ್ನ ಕೂಡ ಕತ್ತರಿಸಿ ಕೆಲ ಎನ್ ಜೈಮ್ ಗಳ ಸಹಾಯದಿಂದ ನುಂಗೊ ಮೊದಲೇ ಸ್ವಲ್ಪ ರಸಗಳ ಮೂಲಕ ಜೀರ್ಣಿಸಿ ತಿನ್ನುತ್ತವೆ. ಅತ್ವಾ, ಅವುಗಳ chelicerae ಅನ್ನೋ ಅಂಗದ ಸಹಾಯದಿಂದ ಗಿಡದ ಮೃದು ಜಾಗದಲ್ಲಿ ಚುಚ್ಚಿ ಸಸ್ಯರಸ ಹೀರುತ್ತವೆ. ಇವೆಲ್ಲ ನಮ್ಮ ಮನೆಯಲ್ಲಿ ಸಿಗುವ ಜೇಡಗಳಲ್ಲದೆ, ಮನೆ ಹೊರಗೆ ಬಲೆ ಹೆಣೆಯುವ ಜೇಡಗಳಲ್ಲಿ ಹೆಚ್ಚು ಕಾಣಸಿಗುತ್ತವೆ.



*ಪೊದೆಸಸ್ಯಗಳ ಸಸ್ಯರಸ ಹೀರಿ ಬದುಕುವ ಮೇವಿಯ ಇಂಕ್ಲಿಮೆನ್ಸ್ (Maevia inclemens)ಎಂಬ ಹೆಣ್ಣು ಜಿಗಿಯುವ ಜೇಡ*

ಈ ಮೊದಲೇ "ಬಘೀರ ಕಿಪ್ಲಿಂಗಿ" ಬಗ್ಗೆ ಹೇಳಿದ್ನಲ್ಲಾ, ಆ ಜಾತಿಯ ಜಿಗಿಯೋ ಜೇಡಗಳು ಹೂಗಳ ಮಕರಂದ ಹೀರುತ್ತವೆಯಂತೆ. ತಮ್ಮ ವಿಶಿಷ್ಟವಾದ ಬಾಯಿ ಭಾಗಗಳನ್ನು ಹೊರಚಾಚಿ ಮಕರಂದ ಹೀರಿ ಬದುಕುವ ಕೀಟಗಳಂತೆಯೇ ಕುಡಿಯುತ್ತವೆ. ವಿಜ್ಞಾನಿಗಳ ಪ್ರಕಾರ ಸುಮಾರು 30 ಜಾತಿಯ ಜಿಗಿಯೋ ಜೇಡಗಳು ಹೀಗೆ ಮಕರಂದ ಹೀರುತ್ತವೆಯಂತೆ. ಇದನ್ನ ಕೇಳಿದ್ರೆ ಹೌದಾ...!' ಅನ್ನಿಸಬಹುದು, ಹೌದು. ಈ ಜೇಡಗಳು ಒಂದು ಘಂಟೆಗೆ ಸುಮಾರು 60-80 ಹೂಗಳಿಂದ ಮಕರಂದ ಹೀರುತ್ತವೆ. ಇದೊಂದೇ ಅಲ್ಲ ಕೆಲ ಜೇಡಗಳು ಪರಾಗ ಕಣಗಳ ತಿಂದು ಕೂಡ ಬದುಕುವವು. ಹೇಗೆಂದರೆ ಜೇಡಗಳು ತಮ್ಮ "ಪ್ರೋಟೀನ್" ನನ್ನು ಮರುಬಳಕೆ ಮಾಡಿಕೊಳ್ಳಲು ತಮ್ಮ ಬಲೆಗಳ ತಾವೇ ತಿನ್ನುತ್ತವೆಯಂತೆ. ಹಾಗೆ ತಿನ್ನುವಾಗ ಅದಕ್ಕೆ ಅಂಟಿಕೊಂಡಿರೋ ಪರಾಗ ಕಣಗಳು, ಬೀಜಗಳು ಹಾಗೂ ಕೆಲ ಶಿಲೀಂಧ್ರ ಬೀಜಕಗಳನ್ನೂ (fungal spores) ಸಹ ತಿಂದುಬಿಡುತ್ತವೆ. ಇಂತಹ ಶಿಲೀಂಧ್ರಗಳು ಅವುಗಳಿಗೆ ಮಾರಕವಾಗಿಯೂ ಪರಿಣಮಿಸುವುವು. ಅಂದ ಹಾಗೆ ಜೇಡಗಳು ಬೇಕಾಗಿಯೇ ಪರಾಗ ಮತ್ತೆ ಬೀಜಗಳನ್ನು, ಸಸ್ಯಾಹಾರಿ ಕೀಟಗಳನ್ನು ತಿನ್ನುವಾಗ ತಿನ್ನುತ್ತವೆಯಂತೆ.

ಹೀಗೆ ಸಸ್ಯಾಹಾರಿ ಜೇಡಗಳು ಎಷ್ಟು ಸಾಮಾನ್ಯ ಎಂಬುದು ಇನ್ನೂ ಸರಿಯಾಗಿ ತಿಳಿದಿಲ್ಲ. "ಜೇಡಗಳ ಈ ಸಸ್ಯಗಳನ್ನು ತಿಂದು ಜೀರ್ಣಿಸಿಕೊಳ್ಳುವ ಶಕ್ತಿ ಎಷ್ಟರಮಟ್ಟಿಗೆ ಇದೆ ಎಂಬುದು, ಇವುಗಳ ಆಹಾರ ಪದ್ಧತಿಗಳ ಬಗ್ಗೆ ನಮ್ಮ ತಿಳುವಳಿಕೆಯ ವಿಕಾಸಿಸುವಂತಾದ್ದು ಹಾಗೂ ಇಂತಹ ಅಭ್ಯಾಸಗಳು ಜೇಡಗಳಿಗೆ ಕೀಟಗಳು ಸಿಗದೇ ಇದ್ದ ಸಮಯದಲ್ಲಿನ ಜೀವನೋಪಾಯ ಮಾರ್ಗಗಳಾಗಿರಬಹುದು." ಎನ್ನುತ್ತಾರೆ ನೈಫ್‌ಫೆಲೇರ್ (Nyffeler) ಎಂಬ ಸಂಶೋದಕರು. ಮತ್ತು ಇಂತ ಸಂಶೋಧನೆಗಳ ಬಳಿಕ ಇಂತಹ ಕೆಲವು ಕೀಟಾಹಾರಿಗಳಲ್ಲದ ಎರೆಹುಳು, ಜೇಡ ಮತ್ತು ಚಿಕ್ಕ ಕಶೇರುಕಗಳನ್ನು "ಕೀಟಾಹಾರಿ"ಗಳನ್ನದೆ ಬೇರೆ ಏನಾದರೂ ಹೆಸರಿಡಬೇಕೆನ್ನಿಸುತ್ತೆ ಅಲ್ವೇ..?.



- ಜೈ ಕುಮಾರ್ .ಆರ್

# ಕಾನನದ ಬೈಗು

ಮೇಘವು ಮರಳಿ ಬಂದಿದೆ,
ಹರುಶವು ಮನದಿ ತುಂಬಿದೆ,
ನದಿಯ ತಡಿಯಲಿ ನಿಂತಿರುವ ನನ್ನ,
ತನ್ನ ಅಂದ ಚಂದದಿ ಸೆಳೆದಿದೆ.

ನದಿಯು ಎಲ್ಲೋ ಜನಿಸಿದೆ,
ಬೆಟ್ಟದಡಿಯ ಕಮರಿನಲ್ಲಿ ಜಲಪಾತವ ಸೃಷ್ಟಿಸಿ
ಕಾನನದೊಳು ಹರಿದು ಬಂದಿದೆ,
ತನ್ನ ಅಂದ ಚಂದದಿ ನನ್ನ ಮನವ ಗೆದ್ದಿದೆ.

ಪಡುವಣದೊಳು ದಿನೇಶನು ಬಂದಿಹನು,
ಗಗನದಿ ಕುಂಕುಮ ಕೇಸರಿಯನ್ನು ಚಲ್ಲಿಹನು,
ಕಾರ್ಮೋಡದ ನಡುವೆ ತನ್ನ ಮುಪ್ಪು ಬೆಳಕನು ಸಾರುತಿಹನು,
ತನ್ನ ಅಂದ ಚಂದದಿ ನನ್ನ ಮನಸ ರಂಜಿಸಿಹನು.

ನಭದಿ ಮೇಘ ಕಾರ್ಮೂಡದಡಿಗೆ,
ದಡದಿ ನದಿಯ ವೈಯಾರದತಡಿಗೆ,
ಸಂಜೆ ಸೂರ್ಯನ ಸರಿಗೆ ನಿಂತು ನಾ,
ಈ ಹಾಡ ಹಾಡಿ ಹರುಷ ಪಡುತಿಹನು.

- ಅನಿಕೇತನ




ಇಡೀ ಈ ಬಣ್ಣದ ಲೋಕ, ನನ್ನದು ಕೂಡ!.



ಒಮ್ಮೊಮ್ಮೆ ಇಡೀ ಪ್ರಕೃತಿಯೇ ತಂಗಪ್ರತಿಬಿಂಬಗಳಾದ ಸಂಧ್ಯಾಕಾಲ ಇದು.

- ಶ್ರೀನಿವಾಸ್ ಶಾಮಾಚಾರ್